**ಕರ್ನಾಟಕ ವಿಧಾನ ಪರಿಷತ್ತು**

| | | | |
|---|---|---|---|
| 01. | ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ | : | 989 |
| 02. | ಸದಸ್ಯರ ಹೆಸರು | : | ಶ್ರೀ ಬಸವರಾಜ ಶಿವಲಿಂಗಪ್ಪ ಹೊರಟ್ಟಿ (ಶಿಕ್ಷಕರ ಕ್ಷೇತ್ರ) |
| 03. | ಉತ್ತರಿಸುವ ದಿನಾಂಕ | : | 12.03.2020 |
| 04. | ಉತ್ತರಿಸುವ ಸಚಿವರು | : | ಗೃಹ ಸಚಿವರು |

<table>
<tr><th>ಕ್ರ.<br>ಸಂ</th><th>ಪ್ರಶ್ನೆ</th><th>ಉತ್ತರ</th></tr>
<tr><td>ಅ)</td><td>ಶ್ರೀ ಎನ್.ಎ. ಮುತ್ತಣ್ಣ ಸ್ಮಾರಕ ಪೋಲೀಸ್ ಮಕ್ಕಳ ವಸತಿ ಶಾಲೆ ಸ್ಥಾಪನೆ ಯಾವ ದಿನಾಂಕದಿಂದ ಪ್ರಾರಂಭವಾಗಿದೆ; ಈ ಶಾಲೆಯನ್ನು ಸ್ಥಾಪಿಸಲು ಇರುವ ಮುಖ್ಯ ಉದ್ದೇಶವೇನು;</td><td>ಶ್ರೀ ಎನ್.ಎ. ಮುತ್ತಣ್ಣ ಸ್ಮಾರಕ ಪೋಲೀಸ್ ಮಕ್ಕಳ ವಸತಿ ಶಾಲೆಯು ದಿನಾಂಕ:05/06/1997ರಲ್ಲಿ ಸ್ಥಾಪನೆಯಾಗಿದ್ದು, ಪೋಲೀಸ್ ಇಲಾಖೆ ನೌಕರರು / ಅಧಿಕಾರಿಗಳ ಮಕ್ಕಳಿಗೆ ಒಳ್ಳೆಯ ವಿದ್ಯಾಭ್ಯಾಸ ನೀಡುವ ಸಲುವಾಗಿ ಈ ವಸತಿ ಶಾಲೆಯನ್ನು ಪ್ರಾರಂಭಿಸಲಾಗಿದೆ.</td></tr>
<tr><td>ಆ)</td><td>ಈ ಶಾಲೆಯಲ್ಲಿ ಕಳೆದ 10 ವರ್ಷಗಳಿಂದ ಇರುವ ಮಕ್ಕಳ ಸಂಖ್ಯೆ ಎಷ್ಟು; ಕಳೆದ 10 ವರ್ಷಗಳಿಂದ ಶಾಲೆಯ ಎಸ್‌ಎಸ್‌ಎಲ್‌ಸಿ ಫಲಿತಾಂಶವೆಷ್ಟು;</td><td>ಶ್ರೀ ಎನ್.ಎ. ಮುತ್ತಣ್ಣ ಸ್ಮಾರಕ ಪೋಲೀಸ್ ಮಕ್ಕಳ ವಸತಿ ಶಾಲೆಯಲ್ಲಿ ಕಳೆದ 10 ವರ್ಷಗಳಿಂದ ಇರುವ ವಿದ್ಯಾರ್ಥಿಗಳ ಸಂಖ್ಯೆ ಹಾಗೂ ಎಸ್‌ಎಸ್‌ಎಲ್‌ಸಿ ಪರೀಕ್ಷೆಯ ಫಲಿತಾಂಶದ ವಿವರ ಕೆಳಕಂಡಂತಿದೆ.
<table>
<tr><th>ವರ್ಷ</th><th>ಒಟ್ಟು<br>ಮಕ್ಕಳ ಸಂಖ್ಯೆ</th><th>ಎಸ್‌ಎಸ್‌ಎಲ್‌ಸಿ<br>ಫಲಿತಾಂಶ<br>(ಶೇಕಡಾವಾರು)</th></tr>
<tr><td>2010-11</td><td>223</td><td>100%</td></tr>
<tr><td>2011-12</td><td>214</td><td>100%</td></tr>
<tr><td>2012-13</td><td>195</td><td>100%</td></tr>
<tr><td>2013-14</td><td>195</td><td>97.22%</td></tr>
<tr><td>2014-15</td><td>208</td><td>92.68%</td></tr>
<tr><td>2015-16</td><td>202</td><td>97.565</td></tr>
<tr><td>2016-17</td><td>180</td><td>97.56%</td></tr>
<tr><td>2017-18</td><td>116</td><td>83.33%</td></tr>
<tr><td>2018-19</td><td>124</td><td>77%</td></tr>
<tr><td>2019-20</td><td>02</td><td>-</td></tr>
</table>
</td></tr>
<tr><td>ಇ)</td><td>ರಾಜ್ಯ ಮಟ್ಟದಲ್ಲಿ ಮತ್ತು ರಾಷ್ಟ್ರ ಮಟ್ಟದಲ್ಲಿ ಶಾಲೆಯ ವಿದ್ಯಾರ್ಥಿಗಳ ಸಾಧನೆ ಏನು; (ಸವಿಸ್ತಾರವಾದ ಮಾಹಿತಿ ನೀಡುವುದು)</td><td>ರಾಜ್ಯ ಮಟ್ಟದಲ್ಲಿ ಮತ್ತು ರಾಷ್ಟ್ರಮಟ್ಟದಲ್ಲಿ ಶಾಲೆಯ ವಿದ್ಯಾರ್ಥಿಗಳ ಸಾಧನೆಗಳ ವಿವರವನ್ನು ಅನುಬಂಧ ದಲ್ಲಿ ಒದಗಿಸಲಾಗಿದೆ.</td></tr>
<tr><td>ಈ)</td><td>2019ರಲ್ಲಿ ಶಾಲೆಯಲ್ಲಿನ 160 ಮಕ್ಕಳನ್ನು ಅಂದಿನ ಪೋಲೀಸ್ ಅಧಿಕಾರಿಗಳು ಶಾಲೆಯಿಂದ ಹೊರಹಾಕಿದ್ದು ಏಕೆ; ಮತ್ತು ಕಾರಣವೇನು;</td><td rowspan="2">2019-20ನೇ ಸಾಲಿನಲ್ಲಿ ಕೇವಲ 02 ವಿದ್ಯಾರ್ಥಿಗಳು ಶಾಲೆಯಲ್ಲಿ ವಿದ್ಯಾಭ್ಯಾಸ ಮಾಡುತ್ತಿದ್ದು, ವಿದ್ಯಾರ್ಥಿಗಳ ಸಂಖ್ಯೆ ಇಳಿಮುಖವಾಗಲು ಕಾರಣರಾದವರನ್ನು ಗುರುತಿಸಲು ಸಮಿತಿಯೊಂದನ್ನು ರಚಿಸಿ, ಅಂತಹ ಅಧಿಕಾರಿ / ಸಿಬ್ಬಂದಿಗಳ ವಿರುದ್ಧ ನಿಯಮಾನುಸಾರ ಸೂಕ್ತ ಕ್ರಮ ಕೈಗೊಳ್ಳಲಾಗುವುದು.</td></tr>
<tr><td>ಉ)</td><td>ಬಡ ಪೋಲೀಸರ ಮಕ್ಕಳಿಗೆ ಅನುಕೂಲವಾಗಿರುವ ಶಾಲೆಯನ್ನು ಕಾನೂನು ಬಾಹಿರವಾಗಿ ಮುಚ್ಚಲು ಪ್ರಯತ್ನಿಸಿದಂತಹ ಅಂದಿನ ಪೋಲೀಸ್ ಅಧಿಕಾರಿಗಳ ಮೇಲೆ ಸರ್ಕಾರ ಕೈಗೊಂಡಿರುವ ಕ್ರಮವೇನು?</td></tr>
</table>

| | | |
|---|---|---|
| ಊ) | ಶಾಲೆಯಲ್ಲಿ ಈ ಮೊದಲು ಅವ್ಯಾಹತವಾಗಿ ನಡೆಯುತ್ತಿದ್ದ ಮಕ್ಕಳ ರೇಷನ್ ಸಮವಸ್ತ್ರ, ಶೂ ಇತ್ಯಾದಿಗಳಲ್ಲಿ ಆಗುತ್ತಿದ್ದ ಭ್ರಷ್ಟಚಾರಗಳು ಸರ್ಕಾರದ ಗಮನಕ್ಕೆ ಬಂದಿದೆಯೇ: ಬಂದಿದ್ದರೆ, ಅವರ ಮೇಲೆ ತೆಗೆದುಕೊಂಡ ಕ್ರಮಗಳೇನು: | ಸರ್ಕಾರದ ಆದೇಶ ಸಂಖ್ಯೆ: ಒಇ 162 ಪೊಸಿಅ 2017(ಭಾಗ-1) ದಿನಾಂಕ 07.02.2018ರಲ್ಲಿ ಶ್ರೀ ಎನ್ ಎ ಮುತ್ತಣ್ಣ ಸ್ಮಾರಕ ಮಕ್ಕಳ ಪೊಲೀಸ್ ವಸತಿ ಶಾಲೆ, ಧಾರವಾಡ ಇಲ್ಲಿ ನಡೆದಿದೆ ಎನ್ನಲಾದ ಅಕ್ರಮಗಳ ಕುರಿತು ತನಿಖೆ ನಡೆಸಲು ಆದೇಶಿಸಲಾಗಿತ್ತು. ಪ್ರಸ್ತುತ, ಸರ್ಕಾರದ ಆದೇಶ ಸಂಖ್ಯೆ: ಒಇ 162 ಪೊಸಿಅ 2017 ದಿನಾಂಕ 03.07.2019ರಲ್ಲಿ ಪ್ರಾದೇಶಿಕ ಆಯುಕ್ತರು, ಬೆಳಗಾವಿ ವಲಯ, ಬೆಳಗಾವಿ ರವರನ್ನು ತನಿಖಾಧಿಕಾರಿಯನ್ನಾಗಿ ನೇಮಿಸಲಾಗಿದೆ. |
| ಋ) | ಈ ಶಾಲೆಯನ್ನು ಮೊದಲಿನಂತೆ ಸರ್ಕಾರದ ನಡೆಸಲು ಅಗತ್ಯ ಕ್ರಮ ಕೈಗೊಳ್ಳಲಾಗುವುದೇ? | 6 ರಿಂದ 9ನೇ ತರಗತಿ ಪ್ರವೇಶಕ್ಕೆ ಅರ್ಜಿಗಳನ್ನು ಆಹ್ವಾನಿಸಿದ್ದು ಶಾಲೆಗೆ ಮಕ್ಕಳನ್ನು ಪ್ರೋತ್ಸಾಹಿಸಿ ಕಳುಹಿಸುವಂತೆ ಎಲ್ಲಾ ಜಿಲ್ಲಾ ಪೊಲೀಸ್ ಅಧೀಕ್ಷಕರಿಗೆ ಮತ್ತು ವಿವಿಧ ಪೊಲೀಸ್ ಘಟಕಾಧಿಕಾರಿಗಳಿಗೆ ಪತ್ರ ಬರೆದಿದ್ದು, ದಿನ ಪತ್ರಿಕೆಯಲ್ಲಿಯೂ ಜಾಹೀರಾತು ನೀಡಲಾಗಿರುತ್ತದೆ. ಎಲ್ಲಾ ಪೊಲೀಸ್ ಅಧಿಕಾರಿ / ಸಿಬ್ಬಂದಿಗಳಿಗೆ ವಾಟ್ಸ್‌ಆಪ್ ಮೂಲಕ / ಎಸ್‌ಎಮ್‌ಎಸ್ ಮೂಲಕ ಸೂಚನೆ ಮಾಡಲಾಗಿದ್ದು, ಕಂಟ್ರೋಲ್ ರೂಮ್‌ನಿಂದಲೂ ಸಹ ಎಲ್ಲರಿಗೂ ಮಾಹಿತಿ ಕಳುಹಿಸಿಕೊಡಲಾಗಿದೆ. |

(ಬಸವರಾಜ ಬೊಮ್ಮಾಯಿ)
ಗೃಹ ಸಚಿವರು

HD/17/PPA/2020-PS_B

ಮಾನ್ಯ ವಿಧಾನ ಪರಿಷತ್ ಸದಸ್ಯರದ ಶ್ರೀ ಬಸವರಾಜ ಶಿವಲಿಂಗಪ್ಪ ಹೊರಟ್ಟಿ (ಶಿಕ್ಷಕರ ಕ್ಷೇತ್ರ) ಇವರ ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ: ೯೮೯ಕ್ಕೆ ಸಂಬಂಧಿಸಿದಂತೆ **ಅನುಬಂಧ**

* * * * *

ರಾಜ್ಯ ಮಟ್ಟದಲ್ಲಿ ಮತ್ತು ರಾಷ್ಟ್ರ ಮಟ್ಟದಲ್ಲಿ ಶ್ರೀ ಎನ್.ಎ. ಮುತ್ತಣ್ಣ ಪೋಲೀಸ್ ಮಕ್ಕಳ ವಸತಿ ಶಾಲೆಯ ವಿದ್ಯಾರ್ಥಿಗಳ ಸಾಧನೆಯ ವಿವರ

| ಕ್ರ. ಸಂ | ವರ್ಷ | ಕ್ರೀಡೆಯ ಹೆಸರು | ಭಾಗವಹಿಸಿದ ವಿದ್ಯಾರ್ಥಿಯ ಹೆಸರು | ಕ್ರೀಡೆ ನಡೆದ ಸ್ಥಳ | ಪಡೆದ ಸ್ಥಾನ |
|---|---|---|---|---|---|
| 01 | 2002-03 | ವಾಲಿಬಾಲ್ | ಶಿವಾನಂದ ಜೋಡಳ್ಳಿ | ರಾಜಸ್ಥಾನ | ತೃತೀಯ |
| | | | ಆನಂದ ಬುಯ್ಯಾರ್ | | ತೃತೀಯ |
| | | | ಉಮೇಶ ಕದಂ | | ತೃತೀಯ |
| | | | ಆನಂದ ಚವಡಿ | | ತೃತೀಯ |
| | | | ಮುಸ್ತಾಕ ಅಹಮ್ಮದ್ | | ತೃತೀಯ |
| 02 | 2003-04 | ಫುಟ್ಬಾಲ್ | ನೂರಅಹ್ಮದ್ ಮುಲ್ಲಾ | ಮಂಡ್ಯ | ಚತುರ್ಥ |
| | | | ಜೆ.ಎಲ್. ಅತಿಥ್ | | ಚತುರ್ಥ |
| | | | ಪ್ರಶಾಂತ ಕರಮಡಿ | | ಚತುರ್ಥ |
| 03 | 2013-14 | 200 ಮೀ. ಓಟ | ಅಭಿಷೇಕ್ ಪೋಲದಾಸ್ | ಹರಿದ್ವಾರ ಉತ್ತರಪ್ರದೇಶ | ಪ್ರಥಮ |
| 04 | 2014-15 | ಎತ್ತರ ಜಿಗಿತ | ವೀರನಗೌಡ ವಿ.ಎಚ್. | ಹರಿದ್ವಾರ ಉತ್ತರಪ್ರದೇಶ | ದ್ವಿತೀಯ |
| | | 400 ಮೀ. ಓಟ | ಶರಣು ಕುಂಬಾರ | | ತೃತೀಯ |
| | | 400 ಮೀ. ಓಟ | ಆನಂದ ಪಾಟೀಲ | | ಚತುರ್ಥ |
| 05 | 2015-16 | 110 ಮೀ. ಹರ್ಡಲ್ಸ್ | ವಿ. ರವೀಂದ್ರ | ಹರಿದ್ವಾರ ಉತ್ತರಪ್ರದೇಶ | ದ್ವಿತೀಯ |
| | | ಜಂಪ್ ರೋಪ್ | ಮಲ್ಲಪ್ಪ ಎಫ್. ಗೋಡಿ. (ವರ್ಲ್ಡ್) | ಪ್ಯಾರಿಸ್ | ದ್ವಿತೀಯ |
| | | ಸ್ಕೇಟಿಂಗ್ | ಎನ್.ಸಿ. ಸುಪ್ರೀತ್ | ಕಟ್ಮಾಂಡೋ | ದ್ವಿತೀಯ |
| 06 | 2016-17 | ರೋಪ್ ಸ್ಕಿಪಿಂಗ್ | ಪ್ರಜ್ವಲ್ ದಿಂಡಿಲಕುಂಪಿ | ಹಂಗೇರಿ ರಾಷ್ಟ್ರ | ಪ್ರಥಮ |
| | | ವರ್ಲ್ಡ್ ಇಂಟರಸ್ಕೂಲ್ ಗೇಮ್ಸ್ | ಪವನ ಎಚ್. ರಾಠೋಡ | | ಪ್ರಥಮ |
| | | ರೋಪ್ ಸ್ಕಿಪಿಂಗ್ | ಸಾಯಿನಾಥ ಪವಾರ | ಕಟ್ಮಾಂಡೋ | ದ್ವಿತೀಯ |